ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1260

ಸದಸ್ಯರ ಹೆಸರು : ಡಾ : ಚಂದ್ರಶೇಖರ್ ಬಿ. ಪಾಟೀಲ್ (ಪದವೀಧರರ ಕ್ಷೇತ್ರ)

ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲ ಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 08-03-2022

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ವಿವಿಧ ಬಾಲಮಂದಿರಗಳಲ್ಲಿ ಮಕ್ಕಳು ನಾಪತ್ತೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ) | ಬಂದಿದ್ದಲ್ಲಿ, ಇಲ್ಲಿಯವರೆಗೆ ಎಷ್ಟು ಪ್ರಕರಣಗಳು ದಾಖಲಾಗಿವೆ; | ಒಟ್ಟು 485 ಮಕ್ಕಳು ನಾಪತ್ತೆಯಾಗಿರುವ ಪ್ರಕರಣಗಳು ದಾಖಲಾಗಿರುತ್ತವೆ. |
| ಇ) | ಪ್ರತಿ ವರ್ಷ ಮಕ್ಕಳ ನಾಪತ್ತೆ ಪ್ರಕರಣಗಳು ಹೆಚ್ಚುತ್ತಿರುವ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು? | ಮಕ್ಕಳ ವಿಷಯಗಳಿಗೆ ಸಂಬಂಧಿಸಿದಂತೆ ಆದ್ಯತೆ ಮೇರೆಗೆ ಕ್ರಮವಹಿಸಲು ಸರ್ಕಾರದ ಒಳಾಡಳಿತ ಇಲಾಖೆಯ ಆದೇಶ ಸಂಖ್ಯೆ: ಹೆಚ್.ಡಿ.20 ಪಿ ಸಿ ಸಿ 2021, ದಿನಾಂಕ:29-06-2021ರಲ್ಲಿ ಮಕ್ಕಳ ವಿಶೇಷ ಪೊಲೀಸ್ ಘಟಕಗಳನ್ನು ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ರಕ್ಷಣಾ) ಕಾಯ್ದೆ 2015ರ ಕಲಂ 107ರನ್ವಯ ಎಲ್ಲಾ ಜಿಲ್ಲೆಗಳಲ್ಲಿ ಪ್ರಾರಂಭಿಸಿ ಮಕ್ಕಳಿಗೆ ಸಂಬಂಧಿಸಿದ ವಿಷಯಗಳನ್ನು ಆದ್ಯತೆ ಮೇರೆಗೆ ಕ್ರಮವಹಿಸಲಾಗುತ್ತಿದೆ.<br><br>ಮಕ್ಕಳು ಬಾಲಮಂದಿರಗಳಿಂದ ತಪ್ಪಿಸಿ ಕೊಳ್ಳದಂತೆ ಸಂಸ್ಥೆಗಳಲ್ಲಿ ಸಿ.ಸಿ.ಟಿ.ವಿ.ಯನ್ನು ಅಳವಡಿಸ ಲಾಗಿರುತ್ತದೆ. ಮಕ್ಕಳ ಸುರಕ್ಷತೆಗಾಗಿ ಬಾಹ್ಯ ಮೂಲಗಳಿಂದ ರಕ್ಷಕ ಸಿಬ್ಬಂದಿಗಳನ್ನು ನೇಮಿಸಿಕೊಳ್ಳಲಾಗಿದೆ. ಮಕ್ಕಳು ಬಾಲಮಂದಿರ ಗಳಿಂದ ತಪ್ಪಿಸಿಕೊಳ್ಳದಂತೆ ತಡೆಯಲು ಮಕ್ಕಳ ಮನ ಪರಿವರ್ತನೆಗಾಗಿ **"ಕಾಮನಬಿಲ್ಲು"** ಎಂಬ ಕಿರು ಚಿತ್ರವನ್ನು ಸಿದ್ಧ ಪಡಿಸಲಾಗಿದ್ದು, ಬಾಲಮಂದಿರ ಗಳಲ್ಲಿ ಹಾಲಿ ವಾಸ್ತವ್ಯ |

| | | |
|---|---|---|
| | | ಪಡೆದಿರುವ ಹಾಗೂ ಹೊಸದಾಗಿ ದಾಖಲಾಗುವ ಮಕ್ಕಳಿಗೆ ಆಗಿಂದಾಗ್ಗೆ ಪ್ರದರ್ಶಿಸುವ ಮೂಲಕ ಅರಿವು ಮೂಡಿಸಲು ಕ್ರಮಕೈಗೊಳ್ಳಲಾಗಿದೆ.<br><br>ಮಕ್ಕಳು ಕಣ್ಮರೆಯಾದ ಕೂಡಲೇ ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ರಕ್ಷಣೆ) ಕಾಯ್ದೆ 2015ರ ಕಲಂ 2(14)(vii) ಮತ್ತು ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ರಕ್ಷಣೆ) ಮಾದರಿ ನಿಯಮಗಳು 2016 ನಿಯಮ 92 ರಂತೆ ಸಂಬಂಧಪಟ್ಟ ವ್ಯಾಪ್ತಿಯ ಹತ್ತಿರದ ಪೊಲೀಸ್ ಠಾಣೆಯಲ್ಲಿ ದೂರು ದಾಖಲಿಸಲಾಗುವುದು. ಪೊಲೀಸ್ ಠಾಣೆಯಿಂದ ಮಗುವನ್ನು 4 ತಿಂಗಳೊಳಗಾಗಿ ಪತ್ತೆ ಹಚ್ಚಲು ಸಾಧ್ಯವಾಗದಿದ್ದಲ್ಲಿ ಅಂತಹ ಪ್ರಕರಣವನ್ನು ಮಾನವ ಕಳ್ಳ ಸಾಗಾಣಿಕೆ ವಿರೋಧಿ ಘಟಕ (Anti Human Traficking Unit)ಕ್ಕೆ ವರ್ಗಾಯಿಸಲಾಗುತ್ತದೆ. |

ಸಂಖ್ಯೆ: ಮಮಇ 34 ಮಭಾಬ 2022

Halappa

(ಆಚಾರ್ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತುಮಕ್ಕಳ
ಅಭಿವೃದ್ಧಿ ಹಾಗೂ ವಿಕಲಚೇತನರ ಹಾಗೂ
ಹಿರಿಯ ನಾಗರಿಕರ ಸಬಲೀಕರಣ ಸಚಿವರು.